# ಬೋಧನಾ ಕಲಿಕಾ ಸಾಮಗ್ರಿಗಳೊಂದಿಗೆ ನನ್ನ ಪ್ರಯತ್ನ

**ಬಿಕಾಶ್**

ಶಿಕ್ಷಣ ಕ್ಷೇತ್ರದಲ್ಲಿ ನಾನು ಕಳೆದ ಐದು ವರ್ಷಗಳಲ್ಲಿ , ದೇಶದಾದ್ಯಂತ ಹಲವು ರೀತಿಯ ಶಾಲೆಗಳನ್ನು ಭೇಟಿ ಮಾಡುವ ಅವಕಾಶ ನನಗೆ ದೊರೆಯಿತು. ಮಜುಲಿಯಲ್ಲಿ ವೆಲ್ ಫೇರ್ ಟ್ರಸ್ಟ್ ವೊಂದು ನಡೆಸುತ್ತಿರುವ ಬುಡಕಟ್ಟು ಮಕ್ಕಳು ಕಲಿಯುತ್ತಿರುವ ಶಾಲೆ ಹಾಗೂ ಮುಂಬೈನಲ್ಲಿ ಗಣ್ಯ ವ್ಯಕ್ತಿಗಳ ಮಕ್ಕಳೇ ದಾಖಲಾತಿ ಪಡೆಯುವ ಶಾಲೆಗಳಿಗೂ ಭೇಟಿ ನೀಡಿದೆ. ಹೀಗೆ ನಾನು ನೋಡಿದ ವಿವಿಧ ಶಾಲೆಗಳು ನನ್ನಲ್ಲಿ ಹಲವಾರು ಪ್ರಶ್ನೆಗಳನ್ನು ಹುಟ್ಟಿಸಿದವು.

ಶಾಲೆಯ ಮೂಲಸೌಕರ್ಯ, ಶಿಕ್ಷಕರ ಗುಣಮಟ್ಟ, ಪಠ್ಯಕ್ರಮ ಮತ್ತು ಕಲಿಕಾ ಸಂಪನ್ಮೂಲಗಳನ್ನು ಬಳಸಿಕೊಳ್ಳುವ ವಿಷಯದಲ್ಲಿ ಕಂಡುಬಂದಂತಹ ಅಸಮಾನತೆಗಳನ್ನು ನೋಡಿ ನನಗೆ ಆಶ್ಚರ್ಯವಾಯಿತು. ಕಟು ವಾಸ್ತವಕ್ಕೆ ತೆರೆದುಕೊಂಡದ್ದು ನಮ್ಮ ದೇಶದಲ್ಲಿ ಇಂಥದ್ದನ್ನೇ ಹೆಚ್ಚಾಗಿ ಕಾಣುತ್ತಿರುವುದಕ್ಕೆ ತಾಳ್ಮೆಯನ್ನು ಕಲಿಸಿತು. ಇದು ನನ್ನ ಸಾಮರ್ಥ್ಯದ ಮಿತಿಯೊಳಗೆ ವಾಸ್ತವ ಪರಿಸ್ಥಿತಿಯನ್ನು ಹೆಚ್ಚು ಸಮಾನವಾಗಿಸಲು ನಾನು ಏನು ಮಾಡಬಹುದು ಎಂಬುದನ್ನು ಪರ್ಯಾಲೋಚಿಸಲು ಹಚ್ಚಿತು.

ನಾನು ಪ್ರಥಮ್ ಎಜುಕೇಶನ್ ಫೌಂಡೇಶನ್ ಜೊತೆ ಕೆಲಸ ಮಾಡುತ್ತಿದ್ದ ಸಮಯ, ಅಸ್ಸಾಂನ ಬೃಹತ್ ಟೆಲಿಕಾಂ ಸಂಸ್ಥೆಯವರು ಪ್ರಾಯೋಜಿಸಿದ ಒಂದು ಶಿಕ್ಷಣ ತಂತ್ರಜ್ಞಾನ ಮೂಲಸೌಕರ್ಯವನ್ನು ಸ್ಥಾಪಿಸುವ ತಂಡದ ಸದಸ್ಯನಾಗಿ ಕಾರ್ಯನಿರ್ವಹಿಸುತ್ತಿದ್ದೆ. ಮೂಲಸೌಕರ್ಯಗಳನ್ನು ಸ್ಥಾಪಿಸುವುದರ ಹೊರತಾಗಿ, ಶಾಲೆಯಲ್ಲಿ ಬೋಧನೆ ಮತ್ತು ಕಲಿಕಾ ಆಚರಣೆಗಳನ್ನು ಸುಧಾರಿಸುವುದು ಕೂಡ ನಮ್ಮ ಮುಖ್ಯ ಉದ್ದೇಶಗಳಲ್ಲಿ ಒಂದಾಗಿತ್ತು.

ನಾವು ಶಾಲೆಗಳಿಗೆ ಪರಿಚಯಿಸಿದ ವ್ಯವಸ್ಥೆಯು ಶಿಕ್ಷಕರನ್ನು ಮೂಲಭೂತವಾಗಿ 'ವೇದಿಕೆಯ ಮೇಲೆ ಋಷಿ' ಯಾಗಿರುವವರು ಎನ್ನುವುದಕ್ಕಿಂತ ಹೆಚ್ಚಾಗಿ 'ಪಕ್ಕದಲ್ಲಿ ನಿಂತು ಮಾರ್ಗದರ್ಶನ' ಮಾಡುವವರು ಆಗಿರಬೇಕು ಎನ್ನುವ ಗುರಿಯನ್ನು ಹೊಂದಿತ್ತು. ಡಿಜಿಟಲ್ ಉಪಕರಣವು ಅವರ ಪಠ್ಯಕ್ರಮದೊಂದಿಗೆ ಹೊಂದಾಣಿಕೆ ಮಾಡಿತು, ಮತ್ತು ಮುಖ್ಯವಾಗಿ, ಪಾಠ ಮಾಡಲು ಅವಶ್ಯಕವಾಗಿರುವ ಬೋಧನಾ ಕಲಿಕಾ ಸಾಮಗ್ರಿಯನ್ನು ವಿನ್ಯಾಸಗೊಳಿಸಲು ಹಂತ-ಹಂತದ ಸೂಚನೆಗಳನ್ನು ನೀಡುವುದರ ಮೂಲಕ ಶಿಕ್ಷಕರನ್ನು ಸಾಕಷ್ಟು ವಿಷಯದೊಂದಿಗೆ ಸಬಲಗೊಳಿಸಿತು. ಶಿಕ್ಷಕರು ತಮ್ಮ ತರಗತಿಗಾಗಿ ಕಲಿಕಾ ಸಾಮಗ್ರಿಗಳನ್ನು ತಯಾರಿಸಲು ಯತ್ನಿಸುತ್ತಿದ್ದ ಪ್ರಯತ್ನಗಳನ್ನು ನೋಡಲು ನಿಜಕ್ಕೂ ಸ್ಫೂರ್ತಿದಾಯಕವಾಗಿತ್ತು ಮತ್ತು ಅದರಲ್ಲಿ ಒಂದು ಅತ್ಯಂತ ಪ್ರೇರೇಪಿಸುವ ಕ್ಷಣವೆಂದರೆ ವಿದ್ಯಾರ್ಥಿಗಳು ಈ ಪ್ರಕ್ರಿಯೆಯಲ್ಲಿ ಭಾಗವಹಿಸಿದಾಗ ಶಿಕ್ಷಕರು ಸುಗಮಕಾರರಾಗಿ ಅಥವಾ ಬೋಧನಾ ನೇತಾರರಾಗಿ ತಮ್ಮ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದುದು.

ಈ ಬರಹದಲ್ಲಿ, ನಾನು ಎರಡು ಪ್ರಕರಣಗಳನ್ನು ಸಂಕ್ಷಿಪ್ತವಾಗಿ ಹಂಚಿಕೊಳ್ಳಲು ಬಯಸುತ್ತೇನೆ: ಒಬ್ಬರು ದಿಬ್ರುಗಢ್ನ ಖಾಸಗಿ ಅನುದಾನಿತ ಶಾಲೆಯ ಶಿಕ್ಷಕರು ಮತ್ತು ಇನ್ನೊಬ್ಬರು ಮುಂಬೈನ ರ್‍ಯಾರಿ ಶಾಲೆಯವರು.

ಅಸ್ಸಾಂನ ದಿಬ್ರುಗಢ್ ನಲ್ಲಿರುವ ರಾಷ್ಟ್ರಭಾಷಾ ಶಾಲೆಯಲ್ಲಿ ಮಕ್ಕಳಿಗೆ ಅನುಭವದ ಕಲಿಕೆಯನ್ನು ನೀಡುವ ಸಲುವಾಗಿ ಶಿಕ್ಷಕರು ಮಕ್ಕಳೊಟ್ಟಿಗೆ ಸೇರಿ ಬೀಜಗಳು ಮತ್ತು ಮೊಳಕೆಯೊಡೆಯುವುದರ ಬಗ್ಗೆ ಪ್ರಯೋಗವೊಂದನ್ನು ತಮ್ಮ ತರಗತಿಯಲ್ಲಿ ಮಾಡಿದರು. ಈ ಪಾಠಯೋಜನೆಯ ಬಗ್ಗೆ ಶಿಕ್ಷಕರು ಮುಂಚಿತವಾಗಿಯೇ ಮಕ್ಕಳಿಗೆ ತಿಳಿಸಿದ್ದರು. ಕನಿಷ್ಠ ಒಂದು ವಿಧದ ಬೀಜವನ್ನು ತರಲು ಮಕ್ಕಳಿಗೆ ಸಾಕಷ್ಟು ಸಮಯವನ್ನು ಸಹ ನೀಡಿದ್ದರು. ಅರ್ಧ ಕತ್ತರಿಸಿದ ಪ್ಲಾಸ್ಟಿಕ್ ಬಾಟಲಿಗಳಲ್ಲಿ, ಅದರ ಅರ್ಧ ಭಾಗಕ್ಕೆ ತುಂಬಿದ ಮಣ್ಣಿನಲ್ಲಿ ಬೀಜಗಳನ್ನು ನೆಡಲು ವಿದ್ಯಾರ್ಥಿಗಳಿಗೆ ಸೂಚನೆ ನೀಡಿದ್ದರು.

ಪಾಠದ ಸಮಯವು ಪ್ರಾರಂಭವಾಗುವುದಕ್ಕೂ ಮುಂಚೆ, ಅವರು ಬೆಳವಣಿಗೆಯ ವಿವಿಧ ಹಂತಗಳಲ್ಲಿ ಇರುವ ಸಸಿಗಳ ಒಂದು ಸೆಟ್ ಅನ್ನು ಸಿದ್ಧಪಡಿಸಿದ್ದರು. ತರಗತಿಯ ಮೊದಲ ದಿನವೇ ಆ ಸಸಿಗಳ ಕುಂಡಗಳನ್ನು ತರಗತಿಯೊಳಗೆ ತಂದು ಮೇಜಿನ ಮೇಲೆ ಸಾಲಾಗಿ ಇರಿಸಿದರು. ಇದರಲ್ಲಿ ತರಗತಿಯಲ್ಲಿದ್ದ ಎಲ್ಲಾ ವಿದ್ಯಾರ್ಥಿಗಳು ಉತ್ಸುಕರಾಗಿ ತೊಡಗಿಸಿಕೊಂಡಿದ್ದರು – ಅವರೆಲ್ಲ ಹೇಗೆ ತರಗತಿಯ ಮೇಲೆ ಹಿಡಿತವನ್ನು ಸಾಧಿಸಿದ್ದರೆಂದರೆ ಅಲ್ಲಿ ಕುತೂಹಲ, ಗದ್ದಲ ತುಂಬಿ ಹೋಗಿತ್ತು. ನನ್ನ ಪಕ್ಕದಲ್ಲಿ ಕುಳಿತಿದ್ದ ಇಬ್ಬರು ವಿದ್ಯಾರ್ಥಿಗಳು ಪರಸ್ಪರ ಸಂಭಾಷಣೆ ಮಾಡುತ್ತಿದ್ದುದನ್ನು ನಾನು ಗಮನಿಸಿದೆ. ಅವರು ವೇಗವಾಗಿ ಬೆಳೆಯುವ ಬೀಜವನ್ನು ತಂದಿದ್ದರೆ ಇಂದು ಅದು ತುಂಬಾ ಎತ್ತರವಾದ ಸಸಿಯಾಗಿ ಬೆಳೆದಿರುತ್ತಿತ್ತು ಎಂದು ಮಾತನಾಡಿಕೊಳ್ಳುತ್ತಿದ್ದರು. ಒಬ್ಬ ವಿದ್ಯಾರ್ಥಿನಿ ತನ್ನ ನಿರಾಶೆಯನ್ನು ತಡೆಯಲಾಗದೇ, ಶಿಕ್ಷಕರನ್ನು ಕುರಿತು ನಾನು ಪ್ರತಿದಿನ ಗಿಡಕ್ಕೆ ನೀರು ಹಾಕುತ್ತಿದ್ದರೂ ಸಹ ಏಕೆ ನನ್ನ ಗಿಡ ಇನ್ನೂ ಬೆಳೆದಿಲ್ಲ ಎಂದು ಕೇಳಿಯೇ ಬಿಟ್ಟಳು.

ಮೊಳಕೆಯೊಡೆಯದಿರುವ ಬೀಜ ಬಿತ್ತಿದ ಆ ಮಗುವಿನ ಜೊತೆ ಮಾತನಾಡಿದಾಗ ನಂತರ, ಶಿಕ್ಷಕರು ತಾಳ್ಮೆಯಿಂದ ತರಗತಿಯನ್ನು ಪ್ರಾರಂಭಿಸಿದರು. ಅವರು ತಾವು ನಡೆಸುತ್ತಿದ್ದ ತರಗತಿಯ ಬಗ್ಗೆ ಸ್ಪಷ್ಟ ಉದ್ದೇಶ ಹೊಂದಿದ್ದರು ಮತ್ತು ವಿದ್ಯಾರ್ಥಿಗಳು ಸಸ್ಯಗಳ ಬಗ್ಗೆ ಕಲಿಯಲು ಸಿದ್ಧರಾಗಿದ್ದರು.

ಅಂದಿನ ತರಗತಿಯು ಬೀಜವೊಂದು ಸಸಿಯಾಗಿ ಬೆಳೆಯುವ, ಅನೇಕ, ಕ್ಷಣ ಬಿಟ್ಟು ಕ್ಷಣ ಅಥವಾ ಒಂದು ಸ್ಥಿರಾಂತರದಲ್ಲಿ ತೆಗೆದ ಚಿತ್ರಗಳನ್ನು ಜೋಡಿಸಿ ಮಾಡಿದ ಕಾಲಾನುಕ್ರಮದ ವೀಡಿಯೊ ಮೂಲಕ ಬೀಜದ ಹಂತದಿಂದ ಹಿಡಿದು ಸಸಿಯಾಗಿ ಬೆಳೆಯುವವರೆಗಿನ ಪ್ರಕ್ರಿಯೆಯನ್ನು ವಿವರಿಸುವ ಮೂರು ನಿಮಿಷಗಳ ವೀಡಿಯೊವನ್ನು ತೋರಿಸುವುದರ ಮೂಲಕ ಪ್ರಾರಂಭವಾಯಿತು. ಈ ಮೂರು ನಿಮಿಷಗಳ ಅವಧಿಯಲ್ಲಿ ಸಸಿ ಗಿಡವಾಗಿ ಬೆಳೆಯುವ ಇಡೀ ಪ್ರಕ್ರಿಯೆಯನ್ನು ನೋಡಿದ ವಿದ್ಯಾರ್ಥಿಗಳು ಹೆಚ್ಚು ಸಂತೋಷಪಟ್ಟರು. ಆದಾಗ್ಯೂ, ಈ ವೀಡಿಯೊವನ್ನು ನೋಡಿದ ಅನೇಕ ವಿದ್ಯಾರ್ಥಿಗಳನ್ನು "ಅದು ಯಾವ ಬೀಜ ಅಷ್ಟು ವೇಗವಾಗಿ ಬೆಳೆಯುತ್ತೆ?" ಎಂದು ಪ್ರಶ್ನಿಸುವಂತೆ ಮಾಡಿತು. ವಿದ್ಯಾರ್ಥಿಗಳ ಈ ಎಲ್ಲಾ ಪ್ರಶ್ನೆಗಳನ್ನು ಸ್ಥಿರಾಂತರದಲ್ಲಿ ತೆಗೆದ ಚಿತ್ರಗಳ ಜೋಡಣೆಯಿಂದ ಮಾಡಿದ ವೀಡಿಯೊ ಎಂದರೆ ಏನು ಎಂದು ವಿವರಿಸುವುದರ ಮೂಲಕ ಮತ್ತು ಅಲ್ಪ ಸಮಯದಲ್ಲಿ ಇಡೀ ಬೆಳವಣಿಗೆಯ ಪ್ರಕ್ರಿಯೆಯನ್ನು ಹೇಗೆ ತೋರಿಸಲಾಯಿತು ಎಂದು ಸ್ಪಷ್ಟಗೊಳಿಸಲಾಯಿತು. ಇಡೀ ತರಗತಿಯ ವಿದ್ಯಾರ್ಥಿಗಳು ಈ ರೀತಿ ವೀಡಿಯೊವನ್ನು ಮಾಡುವ ಪ್ರಕ್ರಿಯೆಯ ಬಗ್ಗೆ ತಿಳಿದು ಬಹಳ ಹರ್ಷಚಿತ್ತರಾದರು.

ಈ ದೃಶ್ಯಗಳನ್ನು ವೀಕ್ಷಿಸಿದ ನಂತರ, ಶಿಕ್ಷಕರು ವಿದ್ಯಾರ್ಥಿಗಳನ್ನು ಅವರು ಬಿತ್ತಿದ್ದ ಬೀಜದ ಬೆಳವಣಿಗೆಯ ಬಗ್ಗೆ ದಾಖಲೆ ಮಾಡಿದ್ದೀರಾ ಎಂದು ಕೇಳಿದರು. ಹೆಚ್ಚಿನ ವಿದ್ಯಾರ್ಥಿಗಳು ತಮ್ಮ ವೀಕ್ಷಣೆಯನ್ನು ದಾಖಲೆ ಮಾಡಿದ್ದರು. ಅದು ಹೆಚ್ಚು ವಿದ್ಯಾರ್ಥಿಗಳು ಇದ್ದ ತರಗತಿಯಾಗಿದ್ದರಿಂದ ಅವುಗಳನ್ನು ಆಮೇಲೆ ಪರಿಶೀಲಿಸುವ ಸಲುವಾಗಿ ಶಿಕ್ಷಕರು ಮೊದಲು ಎಲ್ಲಾ ವಿದ್ಯಾರ್ಥಿಗಳ ನೋಟ್ ಬುಕ್ ಗಳನ್ನು ಸಂಗ್ರಹಿಸತೊಡಗಿದರು. ಆಗ ಒಬ್ಬ

ವಿದ್ಯಾರ್ಥಿನಿಯು ತಾನು ಹಾಕಿದ ಬೀಜವು ಮೊಳಕೆಯೊಡೆಯದ್ದರಿಂದ ತನ್ನ ನೋಟ್ ಬುಕ್ ಕೊಡಲು ಹಿಂಜರಿಯುತ್ತಿದ್ದಳು, ಆಗ ಶಿಕ್ಷಕರು ಅವಳಿಗೆ ನೋಟ್ ಬುಕ್ ಸಲ್ಲಿಸುವಂತೆ ಪ್ರೋತ್ಸಾಹಿಸಿದರು.

ಶಿಕ್ಷಕರು ಎಲ್ಲಾ ಕುಂಡಗಳನ್ನು ಒಂದೇ ಸಾಲಿನಲ್ಲಿ ಜೋಡಿಸಿದ್ದರಿಂದ ಎಲ್ಲಾ ವಿದ್ಯಾರ್ಥಿಗಳಿಗೆ ಸ್ಪಷ್ಟವಾಗಿ ನೋಡಲು ಸಹಾಯವಾಯಿತು. ಶಿಕ್ಷಕರು ವಿದ್ಯಾರ್ಥಿಗಳನ್ನು ಕುರಿತು ನೀವು ಬೀಜವನ್ನು ಆಯ್ಕೆ ಮಾಡುವುದರಿಂದ ಹಿಡಿದು ಅದನ್ನು ಕುಂಡದೊಳಗೆ ನೆಡುವವರೆಗಿನ ಪ್ರಕ್ರಿಯೆಯನ್ನು ಕುರಿತ ಅವರ ಅನುಭವವನ್ನು ಹಂಚಿಕೊಳ್ಳುವಂತೆ ಹೇಳಿದರು. ತರಗತಿಯ ಭಾಗವಹಿಸುವಿಕೆಯು ನನಗೆ ಆಶ್ಚರ್ಯವನ್ನುಂಟುಮಾಡಿತು – ಅಲ್ಲಿ ಉತ್ಸಾಹ, ಉತ್ಸುಕತೆ ಮತ್ತು ಇನ್ನಷ್ಟು ಕಲಿಯಬೇಕೆಂಬ ಹಂಬಲ ತುಂಬಿ ತುಳುಕುತ್ತಿತ್ತು.

ಬೀಜಗಳ ವಿಧಗಳು ಮತ್ತು ಅವು ಮೊಳಕೆಯೊಡೆಯಲು ಬೇಕಾದ ಸ್ಥಿತಿಗತಿಯ ಬಗ್ಗೆ ವಿದ್ಯಾರ್ಥಿಗಳು ತಿಳಿದುಕೊಂಡದ್ದು ಅಲ್ಲಿ ಕಂಡುಬಂದ ಕಲಿಕೆಯಾಗಿತ್ತು. ಕೆಲವು ಬೀಜಗಳು ಏಕೆ ಮೊಳಕೆಯೊಡೆಯಲಿಲ್ಲ ಮತ್ತು ಅದು ಮೊಳಕೆಯೊಡೆಯಲು ಇನ್ನೂ ಸಮಯ ಬೇಕೇ ಎಂಬುದನ್ನು ವೀಕ್ಷಿಸಲು ಅವರು ಪ್ರಯತ್ನಿಸಬಹುದಾದ ಮುಂದಿನ ಹಂತದ ಸಂಭವನೀಯತೆಯನ್ನು ಅನ್ವೇಷಿಸಿದರು. ಶಿಕ್ಷಕರು ಬೆಳವಣಿಗೆಗೆ ಅವಶ್ಯಕವಾದ ಸೂಕ್ತ ಪರಿಸ್ಥಿತಿಯ ಮಾಹಿತಿ ನೀಡುವ ಮೂಲಕ ವಿದ್ಯಾರ್ಥಿಗಳನ್ನು ಬೆಂಬಲಿಸಿದರು.

ತರಗತಿಯು ತುಂಬಾ ತೃಪ್ತಿಯಿಂದ ಮತ್ತು ಉತ್ಸಾಹದಿಂದ ಕೂಡಿತ್ತು, ಜೊತೆಗೆ ವಿದ್ಯಾರ್ಥಿಗಳು ಮುಂದಿನ ಕ್ರಮಗಳ ಕುರಿತು ಮಾತುಕತೆಯಾಡುತ್ತಿದ್ದರು. ತಕ್ಷಣ ಶಿಕ್ಷಕರು, ಬಿತ್ತಿದ ಬೀಜ ಇನ್ನೂ ಮೊಳಕೆಯೊಡೆಯದೇ ಇದ್ದಂತಹ ಮಗುವಿನ ಬಳಿ ಹೋಗಿ ವಿಚಾರಿಸಿದರು. ಆ ವಿದ್ಯಾರ್ಥಿನಿಯು ತರಗತಿಯ ನಂತರ ಸಮಾಧಾನದಿಂದಿದ್ದಳು. ಏಕೆಂದರೆ ಅವಳಿಗೆ ಬೀಜ ಏಕೆ ಮೊಳಕೆಯೊಡೆಯಲಿಲ್ಲ ಎಂಬುದಕ್ಕೆ ಸೂಕ್ತ ಉತ್ತರಗಳು ಸಿಕ್ಕಿದ್ದವು. ಇದರಿಂದ ಅವಳು ಪ್ರೇರೇಪಿತಗೊಂಡು ಮತ್ತೊಮ್ಮೆ ಪ್ರಯತ್ನಿಸಲು ಉತ್ಸುಕಳಾಗಿದ್ದಳು; ಬೀಜ ಮೊಳಕೆಯೊಡೆಯಲು ಬೇಕಾದ ಸ್ಥಿತಿಯನ್ನು ಒದಗಿಸಲು ತಯಾರಿದ್ದಳು.

ಆ ದಿನದ ಕೊನೆಯಲ್ಲಿ, ಶಿಕ್ಷಕರು ಅವರ ತರಗತಿಯ ಬಗ್ಗೆ ಯಾವ ರೀತಿಯಲ್ಲಿ ಪ್ರತಿಕ್ರಿಯಿಸುವರು ಎಂಬುದನ್ನು ತಿಳಿಯಲು ನಾನು ಅವರನ್ನು ಭೇಟಿ ಮಾಡಿದಾಗ, ಅವರು ಮುಗುಳ್ನಗುತ್ತಾ ಹೀಗೆ ಉತ್ತರಿಸಿದರು: 'ಇದು ವಿದ್ಯಾರ್ಥಿಗಳ ಪ್ರಯತ್ನ, ನಾನು ಕೇವಲ ಮಾರ್ಗದರ್ಶಕನಾಗಿದ್ದೆ ಮತ್ತು ಕೆಲವು ಸೂಚನೆಗಳನ್ನು ಮಾತ್ರ ನೀಡಿದ್ದೇನೆ'. ಅವರು ಹೇಳಿದ ಮಾತುಗಳನ್ನು ಕೇಳಿ ನನಗೆ ತುಂಬಾ ಸಂತೋಷವಾಯಿತು. ಪಾಠ ಮಾಡಲು ಸೂಕ್ತವಾದ ಯೋಜನೆ ಮತ್ತು ಕಲಿಯುವವರಿಗೆ ಸಮಯೋಚಿತ, ನಿರ್ದಿಷ್ಟ ಮತ್ತು ಸ್ಪಷ್ಟ ಸೂಚನೆಗಳನ್ನು ನೀಡಿದ ಅವರ ಪ್ರಯತ್ನಗಳನ್ನು ನಾನು ಪ್ರಶಂಸಿಸಿದೆ. ಅವರು ತರಗತಿಯ ಬೋಧನೆಯಲ್ಲಿ ನೀಡಬೇಕಾದ ಸೂಚನೆಗಳ ಪ್ರತಿ ನಿಮಿಷವನ್ನೂ ಪ್ರಜ್ಞಾಪೂರ್ವಕವಾಗಿ ಬಳಸಿದರು.

ಈ ತರಗತಿಯ ಅವಲೋಕನವೇ ನನಗೊಂದು ಕಲಿಕಾ ಶಕ್ತಿಯಾಗಿತ್ತು. ಮಕ್ಕಳಿಗೆ ಕಲಿಸುವ ಸಲುವಾಗಿ ಶಿಕ್ಷಕರು ಎಷ್ಟು ಬೇಕಾದರೂ ಶ್ರಮಪಡುತ್ತಾರೆ ಎಂದು ನಾನು ಈ ಮೊದಲು ಕೇಳಿದ್ದೆ. ತಮ್ಮ ನಿರಂತರ ಕಾರ್ಯಕ್ಷಮತೆಯಿಂದಾಗಿ ರಾಷ್ಟ್ರಮಟ್ಟದಲ್ಲಿ ಮನ್ನಣೆ ಪಡೆದ ಶಿಕ್ಷಕರ ಬಗ್ಗೆಯೂ ಕೇಳಿದ್ದೆ. ಆದರೆ ಇದೇ ಮೊದಲ ಬಾರಿ, ಒಬ್ಬ ಅಸಾಧಾರಣ ಮತ್ತು ನನ್ನ ಹಾಗೂ ಮಕ್ಕಳ ಇಬ್ಬರ ಮನಸ್ಸನ್ನೂ ಗೆದ್ದ ಶಿಕ್ಷಕರನ್ನು ನೋಡಿದೆ.

2015 ರಲ್ಲಿ, ನಮ್ಮ ಪಾಲುದಾರ ಶಾಲೆಯ ಶಿಕ್ಷಕಿಯೊಬ್ಬರನ್ನು ಅವರ ನವೀನ ಬೋಧನಾ ಕಲಿಕಾ ಸಾಧನಗಳ ಮೂಲಕ ತರಗತಿಯ ಅನುಭವವನ್ನು ಉತ್ಕೃಷ್ಟಗೊಳಿಸುವ

ಪ್ರಯತ್ನಗಳಿಗಾಗಿ 'ಟೀಚರ್ ಇನ್ನೋವೇಟರ್' ಎಂದು ಗುರುತಿಸಲಾಗಿತ್ತು. ವಿದ್ಯುತ್ ಉಳಿತಾಯ ಎಂಬ ವಿಷಯದ ಕುರಿತು ಪಾಠ ಮಾಡುವಾಗ, ಅವರು ತಮ್ಮ ಎಲ್ಲಾ ವಿದ್ಯಾರ್ಥಿಗಳಿಗೆ ಕ್ರಮವಾಗಿ ಕಳೆದ ಮೂರು ತಿಂಗಳ ಅವರ ಮನೆಯ ವಿದ್ಯುತ್ ಬಿಲ್ ಗಳನ್ನು ತೆಗೆದುಕೊಂಡು ಬರುವಂತೆ ಸೂಚಿಸಿದ್ದರು ಮತ್ತು ವಿದ್ಯುತ್ ಅನ್ನು ಉಳಿತಾಯ ಮಾಡುವುದು ಹೇಗೆ ಎಂಬುದರ ಬಗ್ಗೆ ಪಾಠವನ್ನು ಮಾಡಲಾಯಿತು. ಬಳಕೆ ಮಾಡುವ ಯೂನಿಟ್ ಮತ್ತು ಹಣವನ್ನು ಹೇಗೆ ಕಡಿಮೆ ಮಾಡಬಹುದು ಎಂಬುದನ್ನು ಕಲ್ಪಿಸಿಕೊಂಡು ಸಂಗ್ರಹಿಸಿದ ದತ್ತಾಂಶಗಳ ಸಹಾಯದಿಂದ ಅವರು ವಿದ್ಯುತ್ ಮತ್ತು ಶುಲ್ಕದ ಹಣ ಎರಡನ್ನೂ ಹೇಗೆ ಉಳಿಸಬಹುದು ಎಂದು ತಿಳಿಯಲು ಸಾಧ್ಯವಾಯಿತು. ಶಿಕ್ಷಕರ ನೇತೃತ್ವದಲ್ಲಿ 'ಮನೆಯಲ್ಲಿ ವಿದ್ಯುತ್ ಬಳಕೆಯನ್ನು ಹೇಗೆ ಕಡಿಮೆ ಮಾಡಬಹುದು' ಎಂಬುದರ ಬಗ್ಗೆ ತರಗತಿಯಲ್ಲಿ ಚರ್ಚೆಯನ್ನು ನಡೆಸಲಾಯಿತು. ಪ್ರತಿ ತಿಂಗಳು ವಿದ್ಯಾರ್ಥಿಗಳು ತಮ್ಮ ಮನೆಯಲ್ಲಿ ವಿದ್ಯುಚ್ಛಕ್ತಿ ಉಳಿಸಲು ಕೈಗೊಂಡ ಕ್ರಮಗಳು ಕಡಿಮೆ ಯೂನಿಟ್ ಬಳಕೆಗೆ ಕಾರಣವಾಗಿವೆಯೇ ಎಂದು ಪ್ರತಿ ತಿಂಗಳ ಬಿಲ್ ಹೋಲಿಸುವ ಮೂಲಕ ಕಂಡುಕೊಳ್ಳುವುದು. ಈ ಪ್ರಯೋಗವು ವಿದ್ಯಾರ್ಥಿಗಳ ಕಲಿಕೆಯ ಮೇಲೆ ಪ್ರಭಾವ ಬೀರುವುದನ್ನು ಶಿಕ್ಷಕರು ಕಂಡುಕೊಂಡರು. ವಿದ್ಯಾರ್ಥಿಗಳು ನಿಜ ಜೀವನದ ಸಮಸ್ಯೆ ಪರಿಹರಿಸಲು ತಮ್ಮ ಕಲಿಕೆಯನ್ನು ಉಪಯೋಗಿಸುತ್ತಿರುವುದಕ್ಕೆ ಶಿಕ್ಷಕರು ಹೆಚ್ಚು ಸಂತಸಪಟ್ಟರು.

ಈ ಮೇಲಿನ ಎರಡೂ ಸಂದರ್ಭಗಳನ್ನು ಗಮನಿಸಿದಾಗ, ಬೋಧನಾ ಕಲಿಕಾ ಸಾಮಗ್ರಿಗಳು ಅಥವಾ ಪರಿಕರಗಳ ಬಳಕೆಯು ಕಡಿಮೆ-ವೆಚ್ಚದ ಅಥವಾ ಯಾವುದೇ ವೆಚ್ಚವಿಲ್ಲದವಾಗಿವೆ; ಆದಾಗ್ಯೂ, ಅವರಿಗೆ ನಿರ್ದಿಷ್ಟ ಪ್ರಮಾಣದ ಪೂರ್ವ-ಯೋಜನೆ ಮತ್ತು ಪಾಠ ಅಥವಾ ಪಠ್ಯಕ್ರಮದ ಉದ್ದೇಶಗಳೊಂದಿಗೆ ಜೋಡಿಸಿ ಕಾರ್ಯಗತಗೊಳಿಸುವ ಅಗತ್ಯವಿತ್ತು. ಕೆಲವೊಮ್ಮೆ ಪಾಠದ ಉದ್ದೇಶಗಳು ಅಸ್ಪಷ್ಟವಾಗಿದ್ದಾಗ ಅಥವಾ ಪರಿಣಾಮಕಾರಿ ಕಲಿಕೆಗಾಗಿ ಯೋಜನೆಯನ್ನು ರೂಪಿಸಿದ್ದರೂ ಸಹ ಅದು ಸದ್ಬಳಕೆಯಾಗದೆಯೂ ಇರಬಹುದು. ಹೀಗಾಗಿ ಪಾಠದ ಉದ್ದೇಶದ ಬಗ್ಗೆ ಮೊದಲೇ ಸ್ಪಷ್ಟತೆಯನ್ನು ಹೊಂದಿರುವುದು ಆನಂತರ ಕಲಿಸಲು ಅರ್ಥಪೂರ್ಣ ಮಾರ್ಗಗಳನ್ನು ಕಂಡುಕೊಳ್ಳುವುದು ತುಂಬಾ ಮುಖ್ಯವಾಗಿರುತ್ತದೆ.

ಪರಿಣಾಮಕಾರಿ ಬೋಧನೆಗಾಗಿ ಬೋಧನಾ ಕಲಿಕಾ ಸಾಮಗ್ರಿಯನ್ನು ಬಳಸುವ ಸಾಧ್ಯತೆಗಳು ಪಾಠದ ಉದ್ದೇಶದಿಂದ ಪ್ರಾರಂಭವಾಗುತ್ತವೆ ಎಂದು ನಾನು ಭಾವಿಸುತ್ತೇನೆ. ಒಮ್ಮೆ ಪಾಠದ ಉದ್ದೇಶವನ್ನು ಸ್ಪಷ್ಟಪಡಿಸಿಕೊಂಡ ನಂತರ, ಬೋಧನೆಗೆ ಅವಶ್ಯಕವಾಗಿರುವ ಕಲಿಕಾ ಸಾಮಗ್ರಿಗಳು ಮತ್ತು ಪರಿಕರಗಳನ್ನು ಯೋಜಿಸಲು ಸುಲಭವಾಗುತ್ತದೆ. ಕೆಲವು ಪರಿಕರಗಳು ಸುಲಭವಾಗಿ ಸಿಗಬಹುದು, ಕೆಲವೊಮ್ಮೆ ಪ್ರಚೋದನಾತ್ಮಕ ಬುದ್ಧಿಮತ್ತೆಯ ಅಗತ್ಯವು ಇರುತ್ತದೆ.

ವಿದ್ಯುತ್ ಬಿಲ್, ಅಡುಗೆಮನೆ ತ್ಯಾಜ್ಯ, ಅಳತೆ ಟೇಪ್ ಮುಂತಾದ ಸರಳವಾದ ವಸ್ತುಗಳನ್ನು ವಿವಿಧ ಪಾಠಗಳಿಗಾಗಿ ಬಳಸಬಹುದು. ಕಲಿಕಾ ಸಾಮಗ್ರಿಗಳು ಮತ್ತು ಪರಿಕರಗಳು ವಿಭಿನ್ನ ಕಲಿಕಾ ಶೈಲಿ ಹೊಂದಿರುವವರಿಗೆ ಉಪಯುಕ್ತವೆನಿಸುತ್ತವೆ ಮತ್ತು ಕಲಿಕೆಯ ಪ್ರಕ್ರಿಯೆಯನ್ನು ಅನುಭವಾತ್ಮಕವಾಗಿಸಲು ಸಹಾಯ ಮಾಡುತ್ತವೆ.

***

**ಬಿಕಾಶ್:** ಇವರು ಪ್ರಸ್ತುತ ಪ್ರಾಯೋಗಿಕ ಗಣಿತ ಪಠ್ಯಕ್ರಮವನ್ನು ಅನುಷ್ಠಾನಗೊಳಿಸುವ ಸಾಮಾಜಿಕ ಯೋಜನೆಯಾದ ವಿಕಲ್ಪ ಇಂಡಿಯಾದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅಜೀಂ ಪ್ರೇಮ್ ಜಿ ವಿಶ್ವವಿದ್ಯಾಲಯದಿಂದ ಪದವಿ ಪಡೆದ

ನಂತರ ಪ್ರಥಮ್ ಎಜುಕೇಶನ್ ಫೌಂಡೇಶನ್ನಲ್ಲಿ ಶಿಕ್ಷಣ ಕ್ಷೇತ್ರದ ತಮ್ಮ ವೃತ್ತಿಜೀವನವನ್ನು ಪ್ರಾರಂಭಿಸಿದರು. ಅವರನ್ನು bikashbhandary.chetry@apu.edu.in ಇಮೇಲ್ ಮೂಲಕ ಸಂಪರ್ಕಿಸಬಹುದು.

ಅನುವಾದ: ಲತಾ ಕೆ. ಸಿ. : ಪರಿಶೀಲನೆ: ನಾಗಮಣಿ ಎಸ್. ಎನ್.